# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1231
2. ಸದಸ್ಯರ ಹೆಸರು : ಶ್ರೀ ಅ. ದೇವೇಗೌಡ
3. ಉತ್ತರಿಸಬೇಕಾದ ದಿನಾಂಕ : 23-12-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಮಾಗಡಿ ತಾಲ್ಲೂಕು ರಾಮನಗರ ಜಿಲ್ಲೆ ಈ ತಾಲ್ಲೂಕಿಗೆ ಹೇಮಾವತಿ ನದಿಯಿಂದ ನಾಲೆಯ ಮೂಲಕ ಕೆರೆಗಳಿಗೆ ನೀರನ್ನು ಹರಿಸುವ ಕಾಮಗಾರಿಯು ಪ್ರಸ್ತುತ ಯಾವ ಹಂತದಲ್ಲಿದೆ? | 1. ಶ್ರೀರಂಗ ನೀರಾವರಿ ಯೋಜನೆಯಲ್ಲಿ ಹೇಮಾವತಿ ಯೋಜನೆಯಡಿ ಬರುವ ತುಮಕೂರು ಶಾಖಾ ನಾಲೆಯ ಸರಪಳಿ:192.300 ಕಿ.ಮೀ ಯಿಂದ 843.71 ಎಂ.ಸಿ.ಎಫ್.ಟಿ. ನೀರನ್ನು ಎತ್ತಿ ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕಿನ 66 ಕೆರೆಗಳಿಗೆ ಹಾಗೂ ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕಿನ ಹುತ್ರಿದುರ್ಗ ಹೋಬಳಿಯ 17 ಕೆರೆಗಳಿಗೆ ಕುಡಿಯುವ ನೀರಿಗಾಗಿ ಒಟ್ಟು 83 ಕೆರೆಗಳನ್ನು ತುಂಬಿಸುವ ಯೋಜನೆಯ ರೂ.277.50 ಕೋಟಿಗಳ ಅಂದಾಜಿಗೆ ದಿನಾಂಕ:28-02-2014 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿತ್ತು. ಸದರಿ ಕಾಮಗಾರಿಯನ್ನು ದಿನಾಂಕ:23-12-2015 ರಂದು 24 ತಿಂಗಳ ಕಾಲಾವಧಿ ನಿಗದಿಪಡಿಸಿ ಟೆಂಡರ್ ಆಧಾರದ ಮೇಲೆ ರೂ.324.67 ಕೋಟಿಗಳ ಮೊತ್ತಕ್ಕೆ ಕರಾರು ವಹಿಸಲಾಗಿದೆ.<br>2. ಯೋಜನೆಯ ಗ್ರಾವಿಟಿ ಮೈನ್‌ನಲ್ಲಿ PSC ಪೈಪುಗಳನ್ನು ಅಳವಡಿಸಲು ಅಂದಾಜಿನಲ್ಲಿ ಪ್ರಾವಿಧಾನ ಮಾಡಲಾಗಿತ್ತು. ಪ್ರಸ್ತುತ PSC ಪೈಪುಗಳ ತಯಾರಿಕೆ ಘಟಕಗಳು ವಿರಳವಾಗಿರುವುದರಿಂದ, ನಿಗದಿತ ಕಾಲಮಿತಿಯೊಳಗೆ ಸರಬರಾಜಿನಲ್ಲಿ ವ್ಯತ್ಯಯ ಉಂಟಾಗಿ PSC ಪೈಪುಗಳ ಬದಲಿಗೆ MS ಮತ್ತು DI ಪೈಪುಗಳನ್ನು ಅಳವಡಿಸಲು ಪ್ರಸ್ತಾಪಿಸಿರುವುದರಿಂದಲೂ ಹಾಗೂ ಖಾಸಗಿ ಜಮೀನಿನ ಭೂಸ್ವಾಧೀನವನ್ನು ಮಿತಿಗೊಳಿಸುವ ದೃಷ್ಟಿಯಿಂದ ಗ್ರಾವಿಟಿ ಮೈನ್ ಪೈಪನ್ನು ರಸ್ತೆ ಬದಿಯಲ್ಲಿ ಕೊಂಡೊಯ್ದರಿಂದ ಗ್ರಾವಿಟಿ ಮೈನ್‌ಗಳ ಉದ್ದ ಹೆಚ್ಚಾಗಿ, ಕಾಮಗಾರಿಯ ಕಾರ್ಯ ವ್ಯಾಪ್ತಿ (Scope of work) ಮಾರ್ಪಾಡುಗೊಂಡ ಪ್ರಯುಕ್ತ, ಕಾಮಗಾರಿಯ ಪ್ರಗತಿ ವಿಳಂಬವಾಗಿದೆ. ರೂ.450.00 ಕೋಟಿ ಮೊತ್ತದ ಪರಿಷ್ಕೃತ ಅಂದಾಜಿಗೆ ದಿನಾಂಕ:15-09-2020 ರಂದು ಅನುಮೋದನೆ ನೀಡಲಾಗಿದೆ.<br>ಪ್ರಾರಂಭದಲ್ಲಿ ಒಟ್ಟಾರೆ ಯೋಜನೆಗೆ ಬೇಕಾಗಿರುವ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲು ನೇರ ಖರೀದಿ ಮೂಲಕ ಪ್ರಯತ್ನಿಸಲಾಗಿ, ಕೆಲವೆಡೆ ನ್ಯಾಯಾಲಯ ಪ್ರಕರಣಗಳು, ಪೌತಿ ಖಾತೆ, ಮಾಲೀಕತ್ವ ವಿವಾದದ ಕಾರಣಗಳಿಂದಾಗಿ ನೇರ ಖರೀದಿ ಅಡಿಯಲ್ಲಿ ಪೂರ್ಣ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲಾಗದೆ, ಭೂಸ್ವಾಧೀನ ವಿಳಂಬವಾಗಿ ಕಾಮಗಾರಿಯು ಕುಂಠಿತವಾಗಿರುತ್ತದೆ. ಇದರಿಂದಾಗಿ, ಭಾಗಶಃ ಭೂಮಿಯನ್ನು ನೇರ ಖರೀದಿ ಹಾಗೂ ಉಳಿಕೆ ಜಮೀನನ್ನು ಸಾಮಾನ್ಯ ಅವಾರ್ಡ್ ಭೂಸ್ವಾಧೀನ ಮೇರೆಗೆ ಕೈಗೊಳ್ಳಲು ಕ್ರಮವಹಿಸಲಾಗಿದೆ. |
| ಆ | 2014 ರಲ್ಲಿ ಪ್ರಾರಂಭವಾದ ಈ ಕಾಮಗಾರಿಯು ಪೂರ್ಣಗೊಳ್ಳಲು ವಿಳಂಬವಾಗುತ್ತಿದ್ದು, ಕಾಮಗಾರಿಯು ತ್ವರಿತವಾಗಿ ಪೂರ್ಣಗೊಳ್ಳಲು ಸರ್ಕಾರ ಏನು ಕ್ರಮ ಕೈಗೊಂಡಿದೆ; | |
| ಇ | ಮಾಗಡಿ ತಾಲ್ಲೂಕಿನ ಕೆರೆಗಳಿಗೆ ನೀರಿನ ಬವಣೆ ಹೆಚ್ಚಾಗಿದ್ದು, ಹೇಮಾವತಿ ನದಿಯಿಂದ ನಾಲೆಯ ಮೂಲಕ ಹರಿಸುವ ಕುಡಿಯುವ ನೀರಿನ ಕಾಮಗಾರಿಯು ಪೂರ್ಣಗೊಳ್ಳಲು ಎಷ್ಟು ಕಾಲಾವಧಿ ಆಗಬಹುದು? | ಈ ಯೋಜನೆಯನ್ನು ದಿನಾಂಕ:31.12.2022 ಕ್ಕೆ ಪೂರ್ಣಗೊಳಿಸಲು ಅಗತ್ಯ ಕ್ರಮ ಕೈಗೊಳ್ಳಲಾಗಿದೆ. |

*ಸಂಖ್ಯೆ:ಜಸಂಇ 214 ಎನ್‌ಎಲ್‌ಎ 2021*

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು